# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 452 |
| ಸದಸ್ಯರ ಹೆಸರು | : | ಶ್ರೀ.ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 06.03.2020 |
| ಉತ್ತರಿಸುವ ಸಚಿವರು | : | ಪಶು ಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಪಶುಸಂಗೋಪನಾ ಇಲಾಖೆಯಲ್ಲಿ ಮಂಜೂರಾದ ಹುದ್ದೆಗಳ ಪೈಕಿ ಅರ್ಧದಷ್ಟು ಹುದ್ದೆ ಖಾಲಿ ಇದೆಯೆಂದು ಮಾಧ್ಯಮದಲ್ಲಿ ವರದಿಯಾಗಿರುವುದು ನಿಜವೇ; ಹೌದಾದರೆ ಇದಕ್ಕೆ ಕಾರಣವೇನು; | ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಮಂಜೂರಾದ ಹುದ್ದೆಗಳ ಪೈಕಿ ಅಧಿಕವಾಗಿ ಪಶುವೈದ್ಯಾಧಿಕಾರಿಗಳ ಹಾಗೂ 'ಡಿ' ದರ್ಜೆ ನೌಕರರ ಹುದ್ದೆಗಳು ಖಾಲಿ ಇರುತ್ತವೆ. ಪಶುವೈದ್ಯ ಪದವೀಧರರ ಕೊರತೆ ಇದ್ದ ಪ್ರಯುಕ್ತ, ರಾಜ್ಯದಲ್ಲಿ ಪಶುವೈದ್ಯಕೀಯ ಮಹಾವಿದ್ಯಾಲಯಗಳ ಸಂಖ್ಯೆ ಹೆಚ್ಚಿಸಿದ್ದು, ಈ ಮಹಾವಿದ್ಯಾಲಯಗಳಿಂದ ಪದವಿ ಪಡೆದು ಹೊರಬರುವ ಪದವೀಧರರನ್ನು ಹಂತಹಂತವಾಗಿ ಖಾಲಿ ಇರುವ ಪಶುವೈದ್ಯಾಧಿಕಾರಿಗಳ ಹುದ್ದೆಗಳಿಗೆ ತುಂಬಲಾಗುತ್ತಿದೆ. ಖಾಲಿ ಇರುವ ಗ್ರೂಪ್ "ಡಿ" ಹುದ್ದೆಗಳಿಗೆ ಸರ್ಕಾರದ ಪತ್ರ ಸಂಖ್ಯೆ ಪಸಂಮೀ 31 ಪಅಸೇ 2018 ದಿನಾಂಕ 12.12.2018 ರನ್ವಯ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಪಡೆಯಲಾಗಿದೆ. |
| ಆ) | ಭರ್ತಿಯಾದ ಹುದ್ದೆ ಮತ್ತು ಖಾಲಿ ಇರುವ ಹುದ್ದೆಗಳೆಷ್ಟು;(ವಿವರ ನೀಡುವುದು) | ಭರ್ತಿಯಾದ ಹುದ್ದೆ ಮತ್ತು ಖಾಲಿ ಇರುವ ಹುದ್ದೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಇ) | ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು | ಕಲ್ಯಾಣ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ 61 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸ್ಥಳೀಯ ಅಭ್ಯರ್ಥಿಗಳಿಂದ ಭರ್ತಿಮಾಡಲು ಕರ್ನಾಟಕ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು (ಕಲ್ಯಾಣ-ಕರ್ನಾಟಕ ಪ್ರಾದೇಶಿಕ ಸ್ಥಳೀಯ ವೃಂದಗಳಲ್ಲಿನ ಪಶುವೈದ್ಯಾಧಿಕಾರಿಗಳ ನೇಮಕಾತಿ)(ವಿಶೇಷ) ನಿಯಮಗಳು, 2019 ರನ್ನು ರಚಿಸಿ, ಅಂತಿಮ ಅಧಿಸೂಚನೆಯನ್ನು ದಿನಾಂಕ 10.12.2019 ರಂದು ಹೊರಡಿಸಿ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಲಾಗಿರುತ್ತದೆ. ಉಳಿದಂತೆ ಇಲಾಖೆಯಲ್ಲಿ ಖಾಲಿ ಇರುವ ಖಾಲಿ |

| | | |
|---|---|---|
| | | ಉಳಿದಂತೆ ಇಲಾಖೆಯಲ್ಲಿ ಖಾಲಿ ಇರುವ ಖಾಲಿ ಇರುವ 639 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇಮಕಾತಿ ನಿಯಮಗಳ ಮುಖಾಂತರ ಭರ್ತಿ ಮಾಡುವ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ.<br><br>ಗ್ರೂಪ್-ಸಿ ವೃಂದಕ್ಕೆ ಸಂಬಂಧಿಸಿದಂತೆ ಕಲ್ಯಾಣ ಕರ್ನಾಟಕ ಪ್ರದೇಶದ ಪಶುವೈದ್ಯಕೀಯ ಸಹಾಯಕರ 83 ಹುದ್ದೆಗಳನ್ನು ಹಾಗೂ ಪಶುವೈದ್ಯಕೀಯ ಪರೀಕ್ಷಕರ 32 ಹುದ್ದೆಗಳನ್ನು (ಕಲ್ಯಾಣ-ಕರ್ನಾಟಕ ಪ್ರಾದೇಶಿಕ ಸ್ಥಳೀಯ ವೃಂದಗಳ ಪಶುವೈದ್ಯಕೀಯ ಪರೀಕ್ಷಕರು ಹಾಗೂ ಪಶುವೈದ್ಯಕೀಯ ಸಹಾಯಕರುಗಳ ನೇಮಕಾತಿ) (ವಿಶೇಷ) ನಿಯಮಗಳು, 2019 ರಚಿಸಿ, ಅಂತಿಮ ಅಧಿಸೂಚನೆಯನ್ನು ದಿನಾಂಕ 11.02.2020 ರಂದು ಹೊರಡಿಸಿ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಲಾಗಿರುತ್ತದೆ.<br><br>ಇಲಾಖೆಯಲ್ಲಿ ಒಟ್ಟು 7363 “ಡಿ” ದರ್ಜೆ ಹುದ್ದೆಗಳು ಮಂಜುರಾಗಿದ್ದು, 2130 ಹುದ್ದೆಗಳು ಭರ್ತಿಯಾಗಿರುತ್ತವೆ. 5233 ಖಾಲಿ ಇವರು ಹುದ್ದೆಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ 2256 ಗ್ರೂಪ್ “ಡಿ” ನೌಕರರ ಸೇವೆಯನ್ನು ಪಡೆದುಕೊಳ್ಳಲಾಗಿದೆ. |

ಸಂ: ಪಸಂಮೀ ಇ-28 ಪಸಸೇ 2020

(ಪ್ರಭು. ಬಿ.ಚವ್ಹಾಣ್)
ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು

ಅನುಬಂಧ-1

ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆಯಲ್ಲಿನ ದಿನಾಂಕ:29-02-2020ರಲ್ಲಿದ್ದಂತೆ ಸಿಬ್ಬಂದಿ ವಿವರ.

| ಕ್ರ.ಸಂ. | ಪದನಾಮ | ಮಂಜೂರು | ಭರ್ತಿ | ಖಾಲಿ | |
|---|---|---|---|---|---|
| | ಎ-ಗುಂಪು | | | | |
| 1 | ಆಯುಕ್ತರು | 1 | 1 | 0 | |
| 2 | ನಿರ್ದೇಶಕರು | 1 | 1 | 0 | |
| 3 | ಅಪರ ನಿರ್ದೇಶಕರು | 5 | 3 | 2 | |
| 4 | ಜಂಟಿ ನಿರ್ದೇಶಕರು | 9 | 5 | 4 | |
| 5 | ಜಂಟಿ ನಿರ್ದೇಶಕರು(ಆಡಳಿತ) | 1 | 1 | 0 | |
| 6 | ಜಂಟಿ ನಿರ್ದೇಶಕರು(ಅಂಕಿ-ಅಂಶ) | 1 | 1 | 0 | |
| 7 | ಉಪ ನಿಯಂತ್ರಕರು(ಹಣಕಾಸು) | 1 | 0 | 1 | |
| 8 | ಉಪ ನಿರ್ದೇಶಕರು(ಅಂಕಿ-ಅಂಶ) | 2 | 1 | 1 | |
| 9 | ಉಪ ನಿರ್ದೇಶಕರು | 60 | 22 | 38 | |
| 10 | ಉಪ ನಿರ್ದೇಶಕರು (ಪಾಲಿಕ್ಲಿನಿಕ್) | 30 | 4 | 26 | |
| 11 | ಸಹಾಯಕ ನಿರ್ದೇಶಕರು/ ಮುಖ್ಯ ಪಶುವೈದ್ಯಾಧಿಕಾರಿ | 685 | 918 | 0 | (ಹೆಚ್ಚುವರಿ:233) *** ಹೊಂದಿಕೊಳ್ಳುವ |
| 13 | ಮುಖ್ಯ ಪಶುವೈದ್ಯಾಧಿಕಾರಿ (ವಿಷಯ ತಜ್ಞರು) | 30 | 18 | 12 | |
| 14 | ಹಿರಿಯ ಪಶುವೈದ್ಯಾಧಿಕಾರಿ | 970 | 582 | 388 | * |
| 15 | ಹಿರಿಯ ಪಶುವೈದ್ಯಾಧಿಕಾರಿ (ವಿಷಯ ತಜ್ಞರು) | 30 | 21 | 9 | * |
| 16 | ಪಶುವೈದ್ಯಾಧಿಕಾರಿ * | 1572 | 933 | 639 | |
| 17 | ಪಶುವೈದ್ಯಾಧಿಕಾರಿ (ವಿಷಯ ತಜ್ಞರು) | 30 | 30 | 0 | |
| 18 | ಕೇಂದ್ರ ಸ್ಥಾನಿಕ ಸಹಾಯಕರು (ಎ-ಗುಂಪು) | 1 | 1 | 0 | |
| 19 | ಸಹಾಯಕ ನಿರ್ದೇಶಕರು(ಕೃಷಿ) | 1 | 0 | 1 | |
| | ಒಟ್ಟು= | 3430 | 2309 | 1121 | |
| | ಬಿ-ಗುಂಪು | | | | |
| 20 | ಸಹಾಯಕ ನಿರ್ದೇಶಕರು(ಸಾಂಖ್ಯಿಕ)/ ಫೀಲ್ಡ್ ಆಫೀಸರ್(ಸಾಂಖ್ಯಿಕ) | 9 | 4 | 5 | |
| 21 | ಜಾನುವಾರು ಅಭಿವೃದ್ಧಿ ಅಧಿಕಾರಿ | 227 | 164 | 63 | |
| 22 | ಸಹಾಯಕ ಆಡಳಿತಾಧಿಕಾರಿಗಳು | 35 | 29 | 6 | |
| 23 | ಕೃಷಿ ಅಧಿಕಾರಿ | 1 | 0 | 1 | |
| 24 | ಸಹಾಯಕ ಅಭಿಯಂತರರು | 1 | 0 | 1 | |
| 25 | ಸಹಾಯಕ ಕೃಷಿ ಅಧಿಕಾರಿ | 7 | 0 | 7 | |
| | ಒಟ್ಟು= | 280 | 197 | 83 | |
| | ಸಿ-ಗುಂಪು | | | | |
| 26 | ಜಾನುವಾರು ಅಧಿಕಾರಿ | 500 | 415 | 85 | |
| 27 | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | 1825 | 1495 | 330 | |
| 28 | ಪಶುವೈದ್ಯಕೀಯ ಪರೀಕ್ಷಕರು * | 1847 | 1330 | 517 | |
| 29 | ಪಶುವೈದ್ಯಕೀಯ ಸಹಾಯಕರು * | 2144 | 1236 | 908 | |
| 30 | ಕೃಷಿ ಸಹಾಯಕರು /ಕ್ಷೇತ್ರ ಸಹಾಯಕರು | 22 | 0 | 22 | |
| 31 | ಕ್ಷೀರ ಮೇಲ್ವಿಚಾರಕರು / ವ್ಯವಸ್ಥಾಪಕರು(ಕ್ಷೀರ) | 1 | 0 | 1 | |
| 32 | ಲ್ಯಾಬ್ ಟೆಕ್ನೀಷಿಯನ್ | 30 | 0 | 30 | |
| 33 | ಎಕ್ಸ್‌ರೇ ಟೆಕ್ನೀಷಿಯನ್ | 1 | 0 | 1 | |
| | ಒಟ್ಟು= | 6370 | 4476 | 1894 | |

| | | | | | |
|---|---|---|---|---|---|
| | ಆಡಳಿತ ವರ್ಗ | | | | |
| 34 | ಆಡಿಟ್ ಅಧೀಕ್ಷಕರು | 1 | 1 | 0 | |
| 35 | ಅಧೀಕ್ಷಕರು | 99 | 97 | 2 | |
| 36 | ಪ್ರಥಮ ದರ್ಜೆ ಸಹಾಯಕರು | 209 | 202 | 7 | |
| 37 | ದ್ವಿತೀಯ ದರ್ಜೆ ಸಹಾಯಕರು | 294 | 284 | 10 | |
| 38 | ಶೀಘ್ರಲಿಪಿಗಾರರು * | 24 | 22 | 2 | |
| 39 | ಹಿರಿಯ ಬೆರಳಚ್ಚುಗಾರರು | 20 | 9 | 11 | |
| 40 | ಬೆರಳಚ್ಚುಗಾರರು | 88 | 43 | 45 | |
| 41 | ಹಿರಿಯ ವಾಹನಚಾಲಕರು | 59 | 12 | 47 | |
| 42 | ವಾಹನಚಾಲಕರು | 237 | 82 | 155 | |
| 43 | ಕಿರಿಯ ಸಾಂಖ್ಯಿಕ ಅಧಿಕಾರಿ (ಸಾಂಖ್ಯಿಕ ಪರೀಕ್ಷಕರು) | 6 | 1 | 5 | |
| 44 | ಸಹಾಯಕ ಸಾಂಖ್ಯಿಕ ಅಧಿಕಾರಿ | 17 | 13 | 4 | |
| 45 | ಪ್ರಚಾರ ಸಹಾಯಕರು | 1 | 0 | 1 | |
| 46 | ಮೆಕಾನಿಕ್ (ಹಿರಿಯ ಶ್ರೇಣಿ) | 2 | 0 | 2 | |
| 47 | ಹಿರಿಯ ಮೆಕಾನಿಕ್ | 2 | 0 | 2 | |
| 48 | ಮೆಕ್ಯಾನಿಕ್ (ಕಿರಿಯ ಶ್ರೇಣಿ) | 5 | 0 | 5 | |
| 49 | ಸಹಾಯಕ ಫಿಟ್ಟರ್ಸ್ | 1 | 0 | 1 | |
| | ಒಟ್ಟು= | 1065 | 766 | 299 | |
| | ಡಿ-ಗುಂಪು | | | | |
| 50 | ಜಮೇದಾರ್ | 42 | 0 | 42 | |
| 51 | ಕುಕ್-ಗೆಸ್ಟ್ ಹೌಸ್ ಕೇರ್ ಟೇಕರ್ | 13 | 0 | 13 | |
| 52 | ವೆಟರಿನರಿ ಅಟೆಂಡೆಂಟ್ / ಗ್ರೂಪ್ ಡಿ * | 7363 | 2130 | 5233 | |
| | ಒಟ್ಟು= | 7418 | 2130 | 5288 | |

| | | | | | |
|---|---|---|---|---|---|
| | ಸಂಕ್ಷಿಪ್ತ | | | | |
| ಕ್ರ.ಸಂ. | ಗುಂಪು | ಮಂಜೂರು | ಭರ್ತಿ | ಖಾಲಿ | |
| 1 | ಎ-ಗುಂಪು | 3430 | 2309 | 1121 | |
| 2 | ಬಿ-ಗುಂಪು | 280 | 197 | 83 | |
| 3 | ಸಿ-ಗುಂಪು | 6370 | 4476 | 1894 | |
| | ಸಿ-ಗುಂಪು(ಆಡಳಿತ ವರ್ಗ) | 1065 | 766 | 299 | |
| 4 | ಡಿ-ಗುಂಪು | 7418 | 2130 | 5288 | |
| | ಒಟ್ಟು= | 18563 | 9878 | 8685 | |

ಸರ್ಕಾರದ ಅಧೀನ ಕಾರ್ಯದರ್ಶಿ
**ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ**
**(ಪಶುಸಂಗೋಪನೆ)**